# ಕಾನನ

JANUARY 2012

ನಿಸರ್ಗದೆಡೆಗೆ ಪಯಣ

## ಲೇಖನಗಳು





ಅನಿಸಿಕೆ

E-mail: kaanana.mag@gmail.com

ಮುಖಪುಟ: ಮಲಬಾರ್ ಗ್ಲೈಡಿಂಗ್ ಕಪ್ಪೆ.



# ಸಂಪಾದಕೀಯ

ಡಿಸಂಬರ್ ಕಳೆದು ಜನವರಿಯ ಮೊದಲ ವಾರದಲ್ಲೇ ಕಾಡಿನ ಸಕಲ ಮರಗಳು ತಮ್ಮ ಎಲೆಗಳನ್ನು ಉದುರಿಸಿ, ಬೋಳಾಗಿ ವಸಂತದ ಆಗಮನಕ್ಕೆ ಸಿದ್ದತೆ ನಡೆಸಿದೆ. ಅನಂತಕಾಲದಿಂದ ಸಹಬಾಳ್ವೆಯಿಂದ ಬದುಕಿ ಬಾಳಿ ಬಂದಿರುವ  ಈ ವನ್ಯಜೀವಿ ಹಾಗೂ ಸಸ್ಯಸಂಕುಲಕ್ಕೆ ನವ ಹರ್ಷದ ವರುಷಗಳೊಂದಿಗೆ.

ನಮ್ಮ ಮಕ್ಕಳನ್ನು ನಿಸರ್ಗದಿಂದ ದೂರವಿಟ್ಟು ಅವುಗಳ ತಲೆಗೆ ಬರೀ ಪುಸ್ತಕಗಳನ್ನು ತುಂಬುವ ಕೆಲಸ ಮಾಡಿ ಬಹು ದೊಡ್ಡ ತಪ್ಪು ಮಾಡುತ್ತಿದ್ದೇವೆ. ಬೆಳಗ್ಗೆ ಶಾಲೆಯ ಹೊಳಗೆ ಜೈಲಿನಂತೆ ಕಳೆದು, ಸಂಜೆ ಹಾಗೂ ರಾತ್ರಿ ಮನೆಯ ಒಳಗೋ ಅಥವಾ ಅಪಾರ್ಟಮೆಂಟಿನಲ್ಲೋ ಕೃತಕ ಗೋಡೆಗಳ ನಡುವೆ, ಪರಿಸರದಿಂದ, ವನ್ಯಜೀವಿಗಳಿಂದ ಬಹುದೂರವಿದ್ದು ಬೆಳೆದು ದೊಡ್ಡವರಾಗುವ ಈ ಯುವಜನರಿಂದ ಎಂತಹುದನ್ನು ತಾನೇ ನಿರೀಕ್ಷಿಸಲೂ ಸಾಧ್ಯ.....!. ಈ ಮಕ್ಕಳಿಗೆ ವನ್ಯತೆಯ ಬಗ್ಗೆ ತಾವು ಜೀವಿಸುತ್ತಿರುವ ಪರಿಸರದ ಸಂಕೀರ್ಣತೆಯ ಬಗ್ಗೆ ತಿಳಿಸುವುದಾದರೂ ಹೇಗೆ ಎಂಬುದೇ ಒಂದು ಮಹಾ ಸವಾಲು? ಅದನ್ನು ಸ್ವಲ್ಪಮಟ್ಟಿಗಾದರೂ ಬೆಳೆಸುವುದೇ ಈ ಕಾನನದ ಪುಟ್ಟ ಪ್ರಯತ್ನ.....!

ಯಕಶ್ಚಿತ್ ಕ್ಷುದ್ರಕಪ್ಪೆಯಲ್ಲೇ ಇರುವ ವಿವಿಧ ಪ್ರಬೇಧಗಳು ಹಾಗೂ ಅವು ಬದುಕಲು ಅನುಸರಿಸುವ ವಿಚಿತ್ರವೆನಿಸುವಂತಹ ಜೀವನಶೈಲಿಗಳನ್ನು ತಿಳಿಯಲು "ಕಪ್ಪೆ ವಿಜ್ಞಾನಿಗಳೊಂದಿಗೆ ಒಂದು ದಿನ"ದಂದು ಕಂಡ ಹೊಸ ನೋಟವನ್ನು ಹಾಗೂ ಪಟ್ಟ ಪಾಡನ್ನು ಕೆ.ಪಿ.ಶಂಕರಪ್ಪರವರು ತಿಳಿಸಿದ್ದಾರೆ. ಗೆಳೆಯ ರಾಜ್ ಪವನ್ ರವರು ತೆಗೆದಿರುವ ಸುಂದರವಾದ ಹಾರುಗಪ್ಪೆಯ ಚಿತ್ರವು ಮುಖಪುಟದ ಅಂದವನ್ನು ಹೆಚ್ಚಿಸಿದೆ.

ಹಳ್ಳಿಗಾಡಿನ ಜನಕ್ಕೆ ತಮ್ಮ ದಿನಚರಿಯಲ್ಲಿಯೇ ಪ್ರಾಣಿ ಪಕ್ಷಿಗಳ ಜೀವಂತ ನಾಟಕವನ್ನು ನೋಡಿ ಅನಂದಿಸುವ ಭಾಗ್ಯವಿದ್ದು, ಅದು ಕೆಲವರಿಗೆ ದಕ್ಕುವಂತದಲ್ಲ ಬಿಡಿ. ಅದರೆ ಈ ಸಾರಿಯ ಹಕ್ಕಿಲೋಕದಲ್ಲಿ ಮೈನಾಹಕ್ಕಿಯು ಕೇರೆಹಾವನ್ನು ಇಮ್ಮಟ್ಟಿಸಿದರ ಬಗ್ಗೆ ವಿಸ್ತಾರವಾಗಿ ಓ.ಎಸ್.ನಾಗೇಶ್ ರವರು ಬರೆದಿದ್ದಾರೆ.

ಈ ಭಾರಿಯ "ವಿವಿ ಅಂಕಣ"ದಲ್ಲಿ ಆನೆಗಳಲ್ಲಿ ಆರನೇ ಬೆರಳಿನ ಬಗ್ಗೆ ಮತ್ತು "ಡೈನೋಸಾರ್ ಗಳ ವಲಸೆ"ಯ ಬಗ್ಗೆ ಮುರಳಿರವರು ತಿಳಿಸಿದ್ದಾರೆ. ಮತ್ತೆ ಬೀಜ ಪ್ರಸಾರ ಸಸ್ಯಗಳ ಜೀವನದಲ್ಲಿ ಅತಿ ಮುಖ್ಯವಾದ ಬಹು ಕಾರ್ಯ. ಮಣ್ಣಿನಲ್ಲೇ ಮರೆಯಾಗುವ ತನಕ, ಮಣ್ಣಿನಿಂದ ಹೊರ ಬರುವ ತನಕ, ಮೊಳಕೆಯಾಗುವ ತನಕ, ಬೆಳೆದು ಮರವಾಗಿ ಸಾಯುವತನಕ ಮರದ ಉಪಯೋಗಗಳನ್ನು ಶೃತಿ ರವರು "ನಾನೊಂದು ಬೀಜ" ಎಂಬ ಕವನದಲ್ಲಿ ಚಿತ್ರಿಸಿದ್ದಾರೆ.

ಇ–ಮೇಲ್ ವಿಳಾಸ: kaanana.mag@gmail.com

**Wildlife Conservation Group**



# ಹಕ್ಕಿಲೋಕ

## * ಗೊರವಂಕ

**ಇಂಗ್ಲೀಷ್ ಹೆಸರು:** **Common Myna** **ವೈಜ್ಞಾನಿಕ ಹೆಸರು:** ***Acridotheres tristis***




ನಮ್ಮ ಮನೆಯ ಮುಂದೆಯೇ ನೂರಾರು ವರ್ಷಗಳ ಇತಿಹಾಸವಿರುವ ಸಣ್ಣ ಕಾಡಿದೆ. ಇದರಲ್ಲಿ ದೈತ್ಯವಾದ ನೇರಳೆ, ಮಾವು, ಅತ್ತಿ ಮತ್ತು ಆಲ ಮುಂತಾದ ಮರಗಳಿದ್ದು ಇವುಗಳು ಗೂಬೆ, ಗೊರವಂಕ, ಹದ್ದು, ಗಿಳಿ, ಕಾಗೆ, ಬಾವಲಿ ಮೊದಲಾದ ಪ್ರಾಣಿ-ಪಕ್ಷಿಗಳಿಗೆ ಆಶ್ರಯ ನೀಡಿವೆ.

ನಮ್ಮ ಮನೆಯಿಂದ ಅರ್ಧ ಫರ್ಲಾಂಗು ದೂರದಲ್ಲಿರುವ ಆಲದ ಮರದಲ್ಲಿ ಸಂಜೆಯಾದರೆ ಸಾವಿರಾರು ಹದ್ದುಗಳು ಬಂದು ಕೊಂಬೆಗಳ ಮೇಲೆ ಸ್ವಲ್ಪವೂ ಜಾಗವಿಲ್ಲದಂತೆ ಕುಳಿತು, ರಾತ್ರಿಯೆಲ್ಲಾ ಅಲ್ಲಿಯೇ ಇದ್ದು ಬೆಳಗ್ಗೆ ತಮ್ಮ ತಮ್ಮ ಕೆಲಸಗಳಿಗೆ ಹೋಗಿ ಮತ್ತೆ ಸಂಜೆ ಆರು ಗಂಟೆಗೆ ಸರಿಯಾಗಿ ಬೆಲ್ ಹೊಡೆದಾಗ ಶಾಲೆಗೆ ಬರುವ ಮಕ್ಕಳಂತೆ ಬಂದು ಜಮಾಯಿಸಿಕೊಳ್ಳುತ್ತವೆ..

ನನಗೆ ಸಮಯಸಿಕ್ಕಾಗ ಮುಸ್ಸಂಜೆಯ ಸೊಬಗಿನ ಜೊತೆಯಲ್ಲಿ ಹಕ್ಕಿಗಳ ಕಲರವವನ್ನು ಕೇಳುತ್ತಾ ನಮ್ಮ ಮನೆಯ ಮೇಲೆ ತೇಜಸ್ವಿಯವರ ಯಾವುದಾದರೊಂದು ಪುಸ್ತಕವನ್ನು ಹಿಡಿದು ಓದುತ್ತ ಕೂರುವುದು ನನ್ನ ದಿನಚರಿಯಲ್ಲಿ ಒಂದು ಭಾಗವಾಗಿ ಹೋಗಿದೆ. ಈ ಸಣ್ಣ ಕಾಡಿನ ಮರಗಳು ಬೆಳದು ದೊಡ್ಡವಾದಂತೆಲ್ಲಾ ಅವುಗಳ ಕೊಂಬೆಗಳು ಪಕ್ಕದಲ್ಲೇ ಇರುವ ಹೊಲದವರೆಗೂ ಹರಡಿಕೊಂಡವು.ಈ ಹೊಲದ ಮಾಲೀಕನು ಮರದ ನೆರಳಿನಿಂದ ಫಸಲು ಚೆನ್ನಾಗಿ

ಬರುವುದಿಲ್ಲವೆಂಬ ಒಂದೇ ಕಾರಣಕ್ಕೆ ನೂರಾರು ಜೀವಿಗಳ ಆಶ್ರಯವಾಗಿದ್ದ ಮರಗಳ ಕೊಂಬೆಗಳನ್ನು ಉಳುಮೆಯ ಕಾಲ ಹತ್ತಿರವಾಗುತ್ತಿದ್ದಂತೆ ಕಡಿದು ಹಾಕಿದ. ಅಂದಿನಿಂದ ಆ ಕೊಂಬೆಗಳ ಮೇಲೆ ಕೂರಲು ಬರುತ್ತಿದ್ದ ಹಲವಾರು ಹಕ್ಕಿಗಳು ಬರುತ್ತಿಲ್ಲ ಎಂಬುದು ಬೇಸರದ ಸಂಗತಿ! ಇದೆಲ್ಲವನ್ನು ನೋಡಿ ಇಂತಹ ದೈತ್ಯವಾದ ಮರಗಳನ್ನು ಕಾಪಾಡಿಕೊಳ್ಳುವುದಾದರು ಹೇಗೆ? ಎಂದೆನೆಸುತ್ತದೆ.

ನಾನು ಎಂದಿನಂತೆ ಬೆಳಗ್ಗೆ ತಡವಾಗಿ ಎದ್ದು ಸ್ನಾನ ಮುಗಿಸಿ ತಲೆ ಒರಸಿಕೊಳ್ಳುತ್ತಾ ಮನೆಯ ಹೊರಗಡೆ ಬಂದಾಗ ನಮ್ಮ ಮನೆಯ ಮುಂದೆಯೇ ಬಂಡೆಯಲ್ಲಿ ಕಲ್ಲುಹೊಡೆಯಲು ಹೋಗುವ ಕೊರಮರದೊಡ್ಡಿ ಹೈಕಳು ಏನನ್ನೋ ನೋಡುತ್ತ ಆ ಆಲದ ಮರದಡಿ ನಿಂತಿರುವುದನ್ನು ಕಂಡು "ಈ ಕಳ್ನನ್ ಮಕ್ಳುಗೆ ಮಾಡಕ್ಕೇನು ಕೆಲಸ ಇಲ್ಲೇನೋ ಬೆಳಗ್ಗೇನೆ ಬಂದುಬಿಟ್ಟಿದಾರಲ್ಲಾ ಹಕ್ಕಿ ಬೇಟೆಗೆ, ಹೀಗೆ ಹಕ್ಕಿ ಹೊಡ್ದು ತಿನ್ತಾ ಇದ್ರೆ ಇವ್ರು ಇನ್ನೆರಡು ತಲೆಮಾರಿಗೆ ಹಕ್ಕಿಗಳ ವಂಶನೇ ನಿರ್ವಂಶ ಮಾಡ್ತಾರೆ" ಎಂದು ಅವರ ಹಕ್ಕಿ ಬೇಟೆಯನ್ನು ಹಲವಾರು ಸಾರಿ ಕಂಡಿದ್ದ ನನಗೆ ಇವರು ಹಕ್ಕಿ ಬೇಟೆಗೆ ಬಂದಿರಬಹುದೆಂದು ಊಹಿಸಿ ಅವರು ಯಾವ ಹಕ್ಕಿಹೊಡೆಯಲು ಹೊಂಚುಹಾಕುತ್ತಿದ್ದಾರೆಂದು ತಿಳಿಯಲು ಶಬ್ಧಮಾಡದೆ ಅವರ ಬಳಿಗೆ ಹೊರಟೆ. ನಾನು ಮರದಹತ್ತಿರ  ಹೋಗುತಿದ್ದಂತ್ತೆಲ್ಲಾ ಮರದಲ್ಲಿರುವ ಹಕ್ಕಿಯ ಚೀರಾಟ ಸ್ಪಷ್ಟವಾಗಿ ಕೇಳಿಸತೊಡಗಿತು.

ಒಬ್ಬ ಅದೇನನ್ನೋ ನೋಡುತ್ತಾ  "ಅಗೋ ಮಾರಾಯ ಆ ದೊಡ್ಡ ರೆಂಬೆ ಅಯ್ತಲ್ಲ ಅದ್ರ ಪಕ್ಕಾನೆ ಇನ್ನೊಂದು ಸಣ್ಣ ರೆಂಬೆ ಹೋಗದಲ್ಲಾ ಅಲ್ಲಿ ಒಂದ್ ಸಣ್ಣ್ ಪೊಟ್ರೆ,ಅಲ್ಲೇ ನೋಡು' ಎನ್ನುತ್ತಿದ್ದ .

"ಕಾಣ್ತಾ? ಹ್ಞೊ...... ಅಲ್ಲಿ!."

"ಕಾಣ್ತು ಕಾಣ್ತು .....! ಹೋ......

ಇದ್ರ ಅಪ್ನ.... ಎಷ್ಟ್ ಮೆಲೆ ಎಕ್ಕೈತೆ..?" ಎಂದು ಬಾಯಿಯ ಮೇಲೆ ಬೆರಳನ್ನು ಇಟ್ಟುಕೊಂಡ.

ಇವನು ಹೇಳುತ್ತಿದ್ದ ವಿಳಾಸವನ್ನು ಕದ್ದು ಕೇಳಿ ಹಿಂಬಾಲಿಸಿದೆ, ವಿಳಾಸವೇನೋ ಸರಿಯಾಗಿಯೇ ಹುಡುಕಿಕೊಂಡೆ, ಅಲ್ಲಿ ನಡೆಯುತ್ತಿದ್ದ ನಾಟಕವನ್ನು ನೋಡಿ ನನಗೆ ಪಕ್ಕದಲ್ಲಿರುವವ ಏಕೆ ಬಾಯಿಯ ಮೇಲೆ ಬೆರಳಿಟ್ಟುಕೊಂಡ ಎಂಬುದರ ಅರಿವಾಯಿತು.



ಕೇರೆಹಾವೊಂದು ಮರದಲ್ಲಿ ಮೈನಾ ಹಕ್ಕಿ ಗೂಡಿಗೆ ಮೊಟ್ಟೆಗಳನ್ನು ತಿನ್ನಲು ಲಗ್ಗೆಯಾಕಿದೆ! ಏಳೆಂಟು ಮೈನಾಗಳು ಗೊಳೋ ... ಎಂದು ಕಿರುಚುತ್ತ ದೊಂಬೆಹಾಕುತ್ತಿವೆ. ಆಗ ಇವರು ಬೇಟೆಯಾಡಲು ಇಲ್ಲಿ ನಿಂತವರಲ್ಲ ಇವರು ಕೇರೆಹಾವು ಮೊಟ್ಟೆ ಕದಿಯುವುದನ್ನು ನೋಡಿ ನಿಂತಿದ್ದಾರೆ ಎಂದುಕೊಂಡೆ.

ಅದೇ ಮರದಲ್ಲಿ ವಾಸವಾಗಿರುವ ಎರಡು ಗಿಳಿಗಳು ಹಾವನ್ನು ಓಡಿಸಲು ಪ್ರಯತ್ನಿಸುತ್ತಿವೆ, ಗಿಳಿಗಳು ಹಾವನ್ನು ಕಚ್ಚಲು ಹೋಗುತ್ತಿದ್ದು, ಇನ್ನೇನು ಹಾವಿಗೆ ಕಚ್ಚಬೇಕು ಎನ್ನುವಷ್ಟರಲ್ಲಿ ಹಾವು “ನಾನೂ ನಿಮಗೇನು ಕಮ್ಮಿಯಿಲ್ಲ” ಎನ್ನುವಂತೆ ಗಿಳಿಗಳನ್ನು ಕಚ್ಚಲು ತಲೆಯೆತ್ತಿ ’ಭುಸ್.....’ ಎಂದು ಬರುತ್ತಿದೆ. ಗಿಳಿಗಳು ಭಯದಿಂದ ಹಾರಿ ಸ್ವಲ್ಪ ದೂರ ಸರಿದರೂ ಹಾವನ್ನು ಮುಂದಕ್ಕೆ ಬರಲು ಬಿಡದೆ ಮತ್ತೆ ಕಚ್ಚಲು ಬರುತ್ತಿವೆ, ಇದೇ ರೀತಿ ಜೀವ ಉಳಿಸಿಕೊಳ್ಳಲು ಹಾವು ಮತ್ತು ಗಿಳಿಗಳ ನಡುವೆ ಸಮರ ನಡೆಯುತ್ತಲೇ ಇತ್ತು, ಮೈನಗಳ ಗೋಳಾಟ ನಿರಂತರವಾಗಿಯೇ ನಡೆಯುತ್ತಿತ್ತು. ಇವುಗಳ ನಾಟಕವನ್ನು ನೋಡಲು ಜಮಾಯಿಸಿದ್ದ ಜನರು ಅರ್ಧ ತಾಸಾದರು ಕ್ಲೈಮಾಕ್ಸ್ ಕಾಣದ ಇವುಗಳ ಜಗಳವನ್ನು ನೋಡಿ ಸಾಕಾಗಿ ಟೈಮಾಯ್ತೆಂದು ತಮ್ಮ ತಮ್ಮ ದಾರಿಗಳನ್ನು ಹಿಡಿದರು. ಹಕ್ಕಿಗಳ ಅರಚಾಟ ಕೂಗಾಟ ನಡೆಯುತ್ತಲೇ ಇತ್ತು. ಕೊನೆಗೂ ಹಾವು ಗಿಳಿಗಳ ತಂಟೆಗೆ ಹೋಗದೆ ಪಕ್ಕದಲ್ಲಿದ್ದ ಮೈನಾಗಳ ಮೊಟ್ಟೆಗಳನ್ನು ಕದ್ದು ತಿಂದು ಮಾಯವಾಯ್ತು. ಇವೆಲ್ಲ ಪರಿಸರದಲ್ಲಿ ಸಮತೋಲನ ಕಾಯ್ದುಕೊಳ್ಳಲು ನಡೆಯುತ್ತಿರುವ ಜೀವಂತ ನಾಟಕದಂತಿತ್ತು. ಆದರೆ ಅದರಲ್ಲಿ ಜಗಳಗಳ ಪಾತ್ರ ದೊಡ್ಡದೇನಲ್ಲ ಬಿಡಿ.

ಮೈನ ಹಕ್ಕಿಗಳಂತಹ ಹಕ್ಕಿಗಳು ದೊಡ್ಡ ದೊಡ್ಡ ಮರಗಳ ಪೊಟರೆಗಳಲ್ಲಿ ಗೂಡುಮಾಡಿ ಮೊಟ್ಟೆಯಿಟ್ಟು ತಮ್ಮ ವಂಶಾಭಿರುದ್ಧಿಯನ್ನು ಮುನ್ನಡೆಸುತ್ತವೆ. ಆದರೆ ಮನುಷ್ಯನು ಅವುಗಳ ಆವಾಸವನ್ನು ಕಡಿದು ಹಾಳುಮಾಡುತ್ತಿರುವುದು ಶೋಚನೀಯ ಸಂಗತಿ.

ಹಳೆಯ ಕಟ್ಟಡಗಳ ಸಂದು, ಸೂರು ಮತ್ತು ಮರಗಳ ಪೊಟರೆಗಳಲ್ಲಿ ಕಡ್ಡಿ, ಬೇರು, ನಾರುಗಳಿಂದ ಗೂಡನ್ನು ಕಟ್ಟಿ ನಾಲ್ಕೈದು ತಿಳಿ ನೀಲಿಯಂತಹ ಮೊಟ್ಟೆಗಳನ್ನು ಇಟ್ಟು ಸುಮಾರು ಹದಿಮೂರು ಅಥವಾ ಹದಿನಾಲ್ಕು ದಿನಗಳಲ್ಲಿ ಮರಿಮಾಡುತ್ತವೆ. ಗೊರವಂಕ ಸಾಮಾನ್ಯವಾಗಿ ಎಲ್ಲರು ನೋಡಿರುವ ಹಕ್ಕಿ. ತಲೆ ಕಪ್ಪು ಬಣ್ಣವಿದ್ದು, ಕಣ್ಣಿನ ಬಳಿ ಹಳದಿಯ ಮಚ್ಚೆಯಿರುತ್ತದೆ. ಇತರ ಉಳಿದ ಮೈ ಬಣ್ಣ ಕಂದು, ಹೊಟ್ಟೆಯ ತಳಭಾಗದಲ್ಲಿ ಮಾಸಲು ಬಿಳಿಯಾಗಿದ್ದು, ರೆಕ್ಕೆ ಮತ್ತು ಬಾಲವು ಕಪ್ಪು ಬಣ್ಣದಿಂದ ಕೂಡಿರುತ್ತದೆ. ಕೊಕ್ಕು ಮತ್ತು ಕಾಲುಗಳು ಹಳದಿ ಬಣ್ಣವಾಗಿದ್ದು, ಹಾರುವಾಗ ರೆಕ್ಕೆಯ ಮೇಲೆ ಬಿಳಿ ಪುಕ್ಕಗಳು ಎದ್ದು ಕಾಣುತ್ತವೆ.





# ಕಪ್ಪೆ ವಿಜ್ಞಾನಿಗಳೊಂದಿಗೆ ಒಂದು ದಿನ

ನಮ್ಮ ತೋಟದಲ್ಲಿ ಒಂದು ಕೆರೆಯಿದೆ. ಇದನ್ನು ಗುರುಸಂತಪ್ಪನೇ ಸ್ವತಃ ತಾನೇ ಸೀಮೆಂಟಿನ ಖಾಲಿ ಪ್ಲಾಸ್ಟಿಕ್ ಚೀಲಗಳಿಗೆ ಮರಳು ತುಂಬಿ, ಆ ಚೀಲಗಳನ್ನು ಹಳ್ಳಕ್ಕೆ ಅಡ್ಡಲಾಗಿ ಇಟ್ಟು, ಬಹಳ ನಾಜೂಕಾಗಿ ಕಟ್ಟೆಕಟ್ಟಿ, ಕೆರೆಯಾಗಿಸಿದಕ್ಕೆ ಹೆಮ್ಮೆಯಿಂದ ಪ್ರತಿ ವರ್ಷಕ್ಕೊಮ್ಮೆ ಆ ಕೆರೆಯಲ್ಲೇ ಮಂಕರಿಗಟ್ಟಲೇ ಮೀನು ಹಿಡಿದು ತಿಂದು ಸುಖಿಸುತ್ತಿದ್ದಾನೆ.

ಮಳೆಗಾಲ ಬಂದು ಜೋರಾಗಿ ಒಂದೆರಡು ಮಳೆಯಾದರೆ ಹೊಸನೀರಿನ ಆಗಮನವಾಗಿ ಕೆರೆ ತುಂಬುತ್ತದೆ. ಮಣ್ಣಿನಲ್ಲಿ, ಕಲ್ಲುಸಂದಿಗಳಲ್ಲಿ ಅಡಗಿ ಕುಳಿತಿದ್ದ ಹಲವು ಕಪ್ಪೆಗಳಿಗೆ ಎಚ್ಚರವಾಗಿ ತಮ್ಮ ತಮ್ಮ ಸಂಗಾತಿಗಳನ್ನು ಹುಡುಕಿಕೊಂಡು ಅದೇಗೋ ಕೆರೆಯನ್ನು ಕಂಡುಹಿಡಿದು ವಟ್ರೋ ವಟ್ರೋ ಎಂದು ಬಾಯಿ ಬಡಿದು ಕೊಳ್ಳುವ ಸದ್ದು ನಮ್ಮ ಒಂದನೇ ತರಗತಿಯ ಆಟದ ಪೀರಿಯಡ್ಡನ್ನೂ ಮೀರಿಸುವ ಡೆಸಿಬೆಲ್ ಲೆವೆಲ್.

ಹುಳ ಹುಪ್ಪಟೆ ತಿನ್ನುವ ಈ ಕ್ಷುದ್ರಜೀವಿಗಳು ಕೆರೆ ತುಂಬಿದಾಗ  ವಟ್ರೋ ವಟ್ರೋ ಕೂಗಾಡಿ ಗಂಡು ಹೆಣ್ಣುಗಳು ಕೂಡಿ, ಕರಿ ಮಣಿ ಪೋಣಿಸಿದಂತೆ ನೂರಾರು ಕಪ್ಪು ಮೊಟ್ಟೆಯನ್ನು  ಸರದಂತೆ ನೀರಿನಲ್ಲಿ ಇಟ್ಟು, ಆ ಮೊಟ್ಟೆಸರದಿಂದ ಬಾಲವಿರುವ ಗೊದ್ದಮೊಟ್ಟೆಗಳು ಹೊರ ಬಂದು, ಅವು ನೀರಿನಲ್ಲೇ ಬೆಳೆದು ದೊಡ್ಡವಾಗಿ ಬಾಲ ಕಳದೋದ ಮೇಲೆ ಭೂಮಿಯ ಮೇಲೆ ಬಂದು ಬದುಕುತ್ತವೆ ಎಂದು ಚಿಕ್ಕವಾನಾಗಿದ್ದಾಗಲೇ ಕೆರೆಯಲ್ಲಿ ಗೆಳೆಯರೊಡನೆ ಈಜು ಕಲಿಯುವಾಗ ನೋಡಿದ್ದೆ. ಹಾಗೂ ಎಸ್ಸೆಸೆಲ್ಸಿ ಮುಗಿಯುವ ವರಿಗೂ ಇದನ್ನೇ ಹಲವು  ಪರೀಕ್ಷೆಯಲ್ಲಿ “ಉಭಯವಾಸಿ” ಎಂದು ಕಂಡ ಕಡೆಯಲ್ಲಾ ಬರೆದ್ದಿದ್ದು ಮಾತ್ರ ನೆನಪಿದೆ.



ಆದರೆ ಕಳೆದ ವಾರ ಹಳ್ಳಿಯ ಸ್ವಾಮೀಜಿಗಳ ಬಳಿ ಬಂದಿದ್ದ ಭಾರತೀಯ ವಿಜ್ಞಾನ ಭವನದ ಜೀವವಿಜ್ಞಾನಿಗಳೊಂದಿಗೆ ಒಂದು ರಾತ್ರಿ ಒಂದು ಹಗಲು "ಕಪ್ಪೆ ಶಿಕಾರಿ"ಯಲ್ಲಿ ಅವರೊಂದಿಗೆ ಭಾಗವಹಿಸುವ ಅವಕಾಶ ದಕ್ಕಿತು. ಅಂದು ರಾತ್ರಿ ನಾನು ಒಂದು ಕೈಯಲ್ಲಿ ಟಾರ್ಚು ಇನ್ನೊಂದು ಕೈಯಲ್ಲಿ ಯಾವುದಕ್ಕೂ ಇರಲಿ ಎಂದು ಒಂದು ಸರಿಯಾದ ದೊಣ್ಣೆಯನ್ನು ಹಿಡಿದು ಕಾಡಿನ ದಾರಿಯಲ್ಲಿ ಸಾಗುತ್ತಿದ್ದರೆ, ಮೊಣಕಾಲುದ್ದದ ಷೂ ಧಾರಿಯಾದ ವಿಜ್ಞಾನಿಗಳು ಅಸಡಾ ಬಸಡಾ ಸದ್ದು ಮಾಡುತ್ತಾ.. ಅವರ ವೈಜ್ಞಾನಿಕ ಉಪಕರಣಗಳನ್ನು ಸಂತೆಯಿಂದ ಈರುಳ್ಳಿ ತರಕಾರಿ ತರುವವರಂತೆ ಎರಡು-ಮೂರು ಚೀಲದಲ್ಲಿ ತುಂಬಿ ಹೊತ್ತು ತರುತ್ತಿದ್ದರು.



ಗುರುಸಾಂತಪ್ಪನ ಕೆರೆಯ ಬಳಿಗೆ ಸರಿಯಾಗಿ ರಾತ್ರಿ ೧೧ ಗಂಟೆಗೆ ತಲುಪಿದೆವು. ಕೆರೆಯಲ್ಲಿ ಜೀವಿಸುವ ದ್ವಿಕೋಶಿ ಸೂಕ್ಷ್ಮಜೀವಿಗಳ ಬಗ್ಗೆ ಅಧ್ಯಾಯನ ನಡೆಸುತ್ತಿದ್ದ **ಹಲ್ವಾ** ರವರು ಕೆರೆಯ ನೀರಿಗೆ ಥರ್ಮೊಮೀಟರ್ ಮುಳುಗಿಸಿ ರೀಡಿಂಗ್ ತೆಗೆದು. "ವಾಟರ್ ಈಸ್ ಟೂ ಕೋಲ್ಡ್!" ಎಂದರು. ಇನ್ನೊಬ್ಬರು ಅಲ್ಲೇ ಕೆರೆಯ ದಡದಲ್ಲೇ ಒಂದು ಮುಂದಿನ ಬಲಗಾಲು ವಿಕಲಾಂಗವಾಗಿರುವ ಅಂಗವಿಕಲ ಕಪ್ಪೆಯನ್ನು ಕಂಡು ಹಿಡಿದು, ಕ್ಯಾಮರದಲ್ಲಿ ಕ್ಲಿಕ್ಕಿಸಿ ದಾಖಲಿಸಿಕೊಂಡರು. ಅಷ್ಟರಲ್ಲೇ ಕೆರೆಯ ಬಳಿ ನೀರು ಕುಡಿಯಲೋ ಏನೋ ಬಂದ ಹತ್ತಾರು ಕಾಡು ಹಂದಿಗಳು ನಮ್ಮನ್ನು ಕಂಡು ಬೆದರಿ ಹಿನ್ನುಗ್ಗಿದ ಸದ್ದಿಗೆ ಎಲ್ಲರ ಕೂದಲ ರೋಮಗಳು ಜಗ್ಗನೆ ನಿಮಿರಿ ಭಯಗೊಂಡ್ವು. ಜೀ ಡೀ ಕ್ಯಾಂಪ್ ಬಳಿ ನಮಗೆ ಒಂದು ಮರಗಪ್ಪೆ ಸಿಕ್ಕಾಗ ಒಂದೇ ರಾತ್ರಿಯಲ್ಲೇ ಎಂಟು ವಿಧದ ಕಪ್ಪೆಗಳನ್ನು ನೋಡಿದ್ದೆವು.

ಎಲ್ಲಾ ಜಾತಿ ಕಪ್ಪೆಗಳು ನನಗೆ ಒಂದೇ ರೀತಿ ಕಾಣುತ್ತಿವೆ. ಅಲ್ಲಾ ಆ ಗೊದ್ದಮೊಟ್ಟೆಯನ್ನು ನೋಡೇ ನೀವು ಅದು ''ಫ್ರಿಝುರ್ವೇರಿಯಾ'' ಪ್ರಭೇದ ಎನ್ನುತ್ತಿರಲ್ಲಾ ಹೇಗೆ? ಎಂದು ಕೇಳಿದೆ.

ನೋಡಿ ಶಂಕರ್ ನಿಮಗೆ ಕೆರೆಯ ನೀರಿನ ಮೇಲೆ ಕಲ್ಲು ಚಿಮ್ಮಿಸಲು ಬರುತ್ತಾ..? ಎಂದರು.

''ಚಿಕ್ಕವನಿದ್ದಾಗ ಐದಾರು ಪಿಚ್ ಹಾರುವಂತೆ ಚಿಮ್ಮಿಸುತ್ತಿದ್ದೆ ಸಾರ್. ಅದರಲ್ಲಿ ನಾನ್ ಎತ್ತಿದ ಕೈ'' ಎಂದೆ.

ನೋಡಿ ಅಲ್ಲಿ ದಡದಲ್ಲಿ ಕುಳಿತಿದೆಯಲ್ಲಾ ಆ ಸಣ್ಣ ಕಲ್ಲಿನ ಪಕ್ಕ, ಅದು ಸ್ಕಿಟರಿಂಗ್ ಫ್ರಾಗ್ ಅಂತ ಅದಕ್ಕೆ, ನಾನೇ ಹೆಸರು ಕೊಟ್ಟಿದ್ದು!. ನೋಡಿ ಎಂದು, ಕಲ್ಲಿನ ಬಳಿ ಕುಳಿತಿದ್ದ ಕಪ್ಪೆಯನ್ನು ತಮ್ಮ ಬೆರಳಿನಿಂದ ಮುಟ್ಟಿದ್ದೆ ತಡ, ನೀರಿನ ಮೇಲೆ ಎಸೆದ ಕಲ್ಲು ಪುಟಿದೇಳುವಂತೆ ಹತ್ತಾರು ಬಾರಿ ಪುಟಿದು ಎದ್ದು ನೀರಿನಲ್ಲಿ ಮುಳುಗಿ ಮಾಯವಾಯ್ತು. ಅಷ್ಟರಲ್ಲೇ ಕಪ್ಪೆ ಶಾಸ್ತ್ರಜ್ಞರ ಕೈಯಿ... ಬೆರಳೂ... ಎಲ್ಲಾ ಬ್ಲಡ್ ! ಮಯ!. ನೀರಿನ ಬಳಿ ಕುಳಿತಿದ್ದ ಕಪ್ಪೆಯನ್ನು ಮುಟ್ಟುವಾಗ ಅಲ್ಲಿದ್ದ ಯಾವುದೋ ಮುಳ್ಳು ತಾಗಿರಬೇಕು ಎಂದು ಕೊಂಡು ಕೈ ತೊಳೆದುಕೊಂಡು ನೋಡಿದರು. ಎಲ್ಲೂ ಗಾಯದ ಗುರುತಿಲ್ಲ! ನೋವು ಇಲ್ಲ! ಅಷ್ಟರಲ್ಲಿ ಹಲ್ಪಳು ಅವರು ಸ್ಕಿಟರಿಂಗ್ ಫ್ರಾಗ್ ಅನ್ನು ಮುಟ್ಟಿದ ದಡದ ನೀರಿನಲ್ಲಿ ಮುಳ್ಳಿದೆಯೇ? ಎಂದು ಟಾರ್ಚ್ ಬಿಟ್ಟು ಪರೀಕ್ಷಿಸಿದಾಗ ಅಲ್ಲಿ ಯಾವುದೇ ಮುಳ್ಳಿಲ್ಲಾ! ಆದರೆ ನೀರಲ್ಲಿ ಬಿದ್ದಿದ್ದಾ ಒಂದು ಎಲೆ ಪೂರ್ತಿ ರಕ್ತವರ್ಣ!. ಆ ಎಲೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅದು ಬ್ಲಡ್ ಅಲ್ಲಾ, ಅದು ಕೆರೆಯಲ್ಲಿ ಜೀವಿಸುವ ಒಂದು ವಿದದ ಶಂಖುವಿನ ಮೊಟ್ಟೆ ಎಂದು ತೀರ್ಮಾನಿಸಿದರು. ಆ ಒಂದು ರಾತ್ರಿಯ ಕಪ್ಪೆ ಬೇಟೆಯಲ್ಲೇ ಕೇಳಿದ ಕಪ್ಪೆಗಳ ಜೀವನದ ಕಥೆಗಳನ್ನು ಕೇಳಿ, ಸಕಲ ಕಪ್ಪೆ ಸಂಕುಲಕ್ಕೆ ಕೈ ಮುಗಿಯಬೇಕು ಎನ್ನುವಂತೆನಿಸಿತು ನನಗೆ ಅದೂ ಈ ಯಕಶ್ಚಿತ್ ಕ್ಷುದ್ರ ಕಪ್ಪೆಗೆ!.



# ವಿದ್ಯಾರ್ಥಿಗಾಗಿ ವಿಜ್ಞಾನ

## ಈ ತಿಂಗಳು ವಿಜ್ಞಾನ ಪ್ರಪಂಚದಲ್ಲಿ ಹೊಸತು

### ಮೈ ಫುಟ್..



ನರ್ಸರಿ ಮಕ್ಕಳು ಎಣಿಸುವಾಗ ಬೆರಳುಗಳನ್ನು ಉಪಯೋಗಿಸುವುದನ್ನು ನೋಡಿದ್ದೇವೆ.

ನಮಗೆಲ್ಲರಿಗೂ ಎಷ್ಟು ಬೆರಳುಗಳಿವೆ?

ಉತ್ತರ ಸುಲಭ, ಐದು ಬೆರಳುಗಳು.

ಆನೆಗಳಿಗೆ ಎಷ್ಟು ಬೆರಳುಗಳಿವೆ? ಇದಕ್ಕೆ ಉತ್ತರಿಸುವುದು ಅಷ್ಟು ಸುಲಭವಲ್ಲ, ಏಕೆಂದರೆ ಆನೆಗಳು (ಸಾಕಿದ) ಬಳಿ ಸಾರುವಾಗ ಅದರ ಗಾತ್ರಕ್ಕೆ ಮಾರುಹೋಗಿ ವಿವಿಧ ಅಂಗಗಳನ್ನು ನೋಡುತಿರುತ್ತೇವೆಯೇ ಹೊರತು ಅದರ ಪಾದದ ಬಳಿಗೆ ನಮ್ಮ ಗಮನವು ಹೋಗುವುದೇ ಇಲ್ಲ.

ಉಗುರುಗಳನ್ನು ಎಣಿಸಿದರೆ ಆನೆಯ ಪಾದದಲ್ಲಿ ಐದು ಬೆರಳುಗಳು ಇರುವುದು ಹೊರನೋಟಕ್ಕೆ ಗೋಚರಿಸಬಹುದು. ಆದರೆ ಆನೆಗಳಿಗೆ ನಿಜವಾಗಿಯೂ ಆರು ಬೆರಳುಗಳು ಇರುವುದೆಂದು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಆರನೆಯ ಬೆರಳು ಪಾದದ ಒಳಗೆ ಆಳದಲ್ಲಿ ಹುದುಗಿದೆಯಂತೆ.

x-rayನಲ್ಲೂ ಗೋಚರಿಸದ ಈ ಬೆರಳನ್ನು ಸತ್ತ ಆನೆಯ ಪಾದಗಳನ್ನು ಕುಯ್ದು ಗಮನಿಸಲಾಗಿದೆ.

# ಡೈನೋ ಸಾರ್ ಗಳ ವಲಸೆ





ಸವನ್ನ ಹುಲ್ಲುಗಾವಲು ಅಫ್ರೀಕದಲ್ಲಿ ಇದೆ. ಅಲ್ಲಿ ಎಲ್ಲಿ ನೋಡಿದರೂ ಸಂವೃದ್ದವಾಗಿ ಬೆಳೆದ ಹುಲ್ಲು. ಆದರೆ ಬೇಸಿಗೆ ಕಾಲದಲ್ಲಿ ಪ್ರಾಣಿಗಳಿಗೆ ಕುಡಿಯುವ ನೀರಿನ ಬರ. ಆದ್ದರಿಂದ ಅಲ್ಲಿನ ಸಸ್ಯಾಹಾರಿ ಪ್ರಾಣಿಗಳು ನೀರನ್ನು ಹುಡುಕಿಕೊಂಡು ನೂರಾರು ಮೈಲಿ ವಲಸೆ ಹೋಗುತ್ತವೆ. ಇದೆ ರೀತಿ 200 ಮಿಲಿಯನ್ ವರ್ಷಗಳ ಹಿಂದೆಯೂ ಸಹ ಡೈನೋಸಾರ್ ಗಳು ವಲಸೆ ಹೋಗುತ್ತಿದ್ದವೆಂದು ಅವುಗಳ ಹಲ್ಲುಗಳ ಪಳೆಯುಳಿಕೆ ನೋಡಿ ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಡೈನೋಸಾರ್ ಹಲ್ಲುಗಳನ್ನು ಕಾರ್ಬನ್ ಡೇಟಿಂಗ್ ಮಾಡಿದಾಗ ಆ ಹಲ್ಲುಗಳ ಪದರಗಳಲ್ಲಿ ಆಮ್ಲಜನಕದ ಪ್ರಮಾಣ ಹೆಚ್ಚು ಕಡಿಮೆಯಾಗಿರುವುದು ಬೆಳಕಿಗೆ ಬಂದಿದೆ. ಇದರಿಂದ ಅವು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಪರಿಸರದಲ್ಲಿ ನೀರು ಕುಡಿದಿದ್ದರಿಂದ ಆಮ್ಲಜನಕದ ಪ್ರಮಾಣ ಹೆಚ್ಚು ಕಡಿಮೆಯಾಗಿರುವುದಕ್ಕೆ ಅವುಗಳ ವಲಸೆಯೇ ಕಾರಣವೆಂದು ಕಂಡು ಹಿಡಿದ್ದಿದ್ದಾರೆ.



# ನಾನೊಂದು ಬೀಜ

ಹಕ್ಕಿಯಂತೆ ಹಾರುತ
ಎಲೆಯಂತೆ  ತೇಲುತ
ಎಲ್ಲಿಂದಲೋ ಎಲ್ಲಿಯವರೆಗೋ
ನೆಲೆಕಾಣುವ ವರೆಗೆ ನಾ ಸಾಗುತ

ಜಲ ಹೀರುವ ತನಕ
ಮಣ್ಣಿನಲ್ಲೇ ಮರೆಯಾಗುವ ತನಕ
ಮಣ್ಣಿನಿಂದ ಹೊರ ಬರುವ ತನಕ
ಮೊಳಕೆಯಾಗುವ ತನಕ

ಕಣ ಕಣವೆ ಕ್ಷಣ ಕ್ಷಣವು
ಬೆಳೆಯುವೆನಾ ಹೆಮ್ಮರವಾಗಲು
ಸಾವಿರ ವರುಷ ಬದುಕಲು
ನಿಮಗೆಲ್ಲಾ ಆಶ್ರಯ ನೀಡಲು

ಬೆಳೆಯುತ ಪರಾವಲಂಬಿ ಯಾದರು
ಶಾಖ ನೀರು ಲವಣಗಳ ತೆಗೆದುಕೊಂಡುರು
ಪ್ರಾಣಿ- ಪಕ್ಷಿಗಳಿಗೆ ಆಹಾರ, ಆಶ್ರಯ ನೀಡುತ
ಬೆಳದು ಉಪಕಾರಿಯಾಗುವೆ

ಕೊನೆಯಾಗುವೆನಾ ಬಂದಂತೆಯೇ
ಮರೆಯಾಗುವೆನಾ ಬಂದಲ್ಲಿಯೇ
ನನ್ನಂತವರ ಬೆಳವಣಿಗೆಗೆ ಕಾರಣವಾಗುತ
ಫಲವತ್ತಾದ ಗೊಬ್ಬರವಗುವೆನಾ.



- ಶ್ರುತಿ.ಎಂ